# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಸದಸ್ಯರ ಹೆಸರು | : | ಶ್ರೀ ವಿಜಯ ಸಿಂಗ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 274 |
| ಉತ್ತರಿಸಬೇಕಾದ ದಿನಾಂಕ | : | 11.12.2020. |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಪಶುಸಂಗೋಪನೆ, ಹಜ್ ಹಾಗೂ ವಕ್ಫ್ ಸಚಿವರು. |

| ಕ್ರ. ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | 2016 ರಿಂದ ಇಲ್ಲಿಯವರೆಗೆ ಬೀದರ್ ಜಿಲ್ಲೆಯಲ್ಲಿ ಸಾವನ್ನಪ್ಪಿರುವ ಜಾನುವಾರುಗಳ ಸಂಖ್ಯೆ ಎಷ್ಟು; ಇಲ್ಲಿಯವರೆಗೆ ಮೃತಪಟ್ಟ ಎಷ್ಟು ಜಾನುವಾರುಗಳಿಗೆ ಪರಿಹಾರ ನೀಡಲಾಗಿದೆ; ಜಾನುವಾರು ಮೃತಪಟ್ಟು ವರ್ಷವಾದರೂ ರೈತರಿಗೆ ಪರಿಹಾರ ನೀಡಲು ಆಗಿರುವ ವಿಳಂಬಕ್ಕೆ ಕಾರಣವೇನು; (ವರ್ಷವಾರು ವಿವರ ನೀಡುವುದು) | ಸದರಿ ಯೋಜನೆಯು 2017 ರಿಂದ ಪ್ರಾರಂಭವಾಗಿದ್ದು, ಬೀದರ್ ಜಿಲ್ಲೆಯಲ್ಲಿ ಸಾವನ್ನಪ್ಪಿರುವ ಜಾನುವಾರುಗಳ ಸಂಖ್ಯೆ (see table below). 2019-20 ರಿಂದ ಸಾಮಾನ್ಯ ವರ್ಗದ ಫಲಾನುಭವಿಗಳಿಗೆ ಯಾವುದೇ ಅನುದಾನ ಬಿಡುಗಡೆಯಾಗಿರುವುದಿಲ್ಲ. 2020-21 ನೇ ಸಾಲಿನಲ್ಲಿ ಯಾವ ವರ್ಗದವರಿಗೂ ಅನುದಾನ ಬಿಡುಗಡೆಯಾಗದೆ ಇರುವ ಕಾರಣ ಪರಿಹಾರ ನೀಡಲು ವಿಳಂಬವಾಗಿರುತ್ತದೆ. |

| ವರ್ಷ | ಮರಣಿಸಿದ ಜಾನುವಾರುಗಳ ಸಂಖ್ಯೆ | ಪರಿಹಾರ ನೀಡಲಾದ ಜಾನುವಾರುಗಳ ಸಂಖ್ಯೆ |
|---|---|---|
| 2017-18 | 174 | 148 |
| 2018-19 | 532 | 404 |
| 2019-20 | 360 | 108 |
| 2020-21 | 219 | 41 |
| | **1285** | **701** |

| ಕ್ರ. ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಆ | ಬೀದರ್ ಜಿಲ್ಲೆಯಲ್ಲಿ ಜಾನುವಾರುಗಳಿಗೆ ಚಿಕಿತ್ಸೆ ನೀಡಲು ಇರುವ ಆಸ್ಪತ್ರೆಗಳ ಸಂಖ್ಯೆ ಎಷ್ಟು; (ತಾಲ್ಲೂಕುವಾರು ವಿವರ ನೀಡುವುದು) | (see table below) |

| ಕ್ರ. ಸಂ. | ತಾಲ್ಲೂಕು | ಆಸ್ಪತ್ರೆಗಳ ಸಂಖ್ಯೆ (5-ಸಂಚಾರಿ ಪಶು ಚಿಕಿತ್ಸಾಲಯಗಳು ಸೇರಿ) |
|---|---|---|
| 1 | ಬೀದರ್ | 22 |
| 2 | ಭಾಲ್ಕಿ | 25 |
| 3 | ಹುಮನಾಬಾದ | 26 |
| 4 | ಔರಾದ | 21 |
| 5 | ಬಸವಕಲ್ಯಾಣ | 20 |
| | **ಒಟ್ಟು** | **114** |

| ಕ್ರ. ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಇ | ಈ ಪೈಕಿ ಸ್ವಂತ ಕಟ್ಟಡ ಹಾಗೂ ಖಾಸಗಿ ಕಟ್ಟಡಗಳಲ್ಲಿ ಇರುವ ಆಸ್ಪತ್ರೆಗಳ ಸಂಖ್ಯೆ ಎಷ್ಟು; ಸ್ವಂತ ಕಟ್ಟಡ ನಿರ್ಮಾಣಕ್ಕೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ; | (see table below) |

| ಕ್ರ. ಸಂ. | ತಾಲ್ಲೂಕು | ಸ್ವಂತ ಕಟ್ಟಡ ಇರುವ ಆಸ್ಪತ್ರೆಗಳ ಸಂಖ್ಯೆ | ಸ್ವಂತ ಕಟ್ಟಡ ಇಲ್ಲದ ಆಸ್ಪತ್ರೆಗಳ ಸಂಖ್ಯೆ | ಒಟ್ಟು ಆಸ್ಪತ್ರೆಗಳ ಸಂಖ್ಯೆ |
|---|---|---|---|---|
| 1 | ಬೀದರ್ | 21 | 0 | 21 |
| 2 | ಭಾಲ್ಕಿ | 23 | 01 | 24 |

| | | | | |
|---|---|---|---|---|
| 3 | ಹುಮನಾಬಾದ | 25 | 0 | 25 |
| 4 | ಔರಾದ | 18 | 02 | 20 |
| 5 | ಬಸವಕಲ್ಯಾಣ | 19 | 0 | 19 |
| | **ಒಟ್ಟು** | **106** | **03** | **109** |

ನಿವೇಶನ ಹಾಗೂ ಅನುದಾನದ ಲಭ್ಯತೆ ಮೇರೆಗೆ ಆರ್.ಐ.ಡಿ.ಎಫ್. ಯೋಜನೆಯಡಿಯಲ್ಲಿ ಹಂತ ಹಂತವಾಗಿ ಸ್ವಂತ ಕಟ್ಟಡ ನಿರ್ಮಾಣಕ್ಕೆ ಕ್ರಮವಹಿಸಲಾಗುತ್ತಿದೆ.

**ಈ** ಪಶುಸಂಗೋಪನೆ ಇಲಾಖೆಯಲ್ಲಿ ಖಾಲಿ ಇರುವ ಹುದ್ದೆಗಳ ಸಂಖ್ಯೆ ಎಷ್ಟು; ಸದರಿ ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲು ಕೈಗೊಂಡಿರುವ ಕ್ರಮವೇನು; (ತಾಲ್ಲೂಕುವಾರು ಹುದ್ದೆವಾರು ವಿವಿರ ನೀಡುವುದು)

| **ಕ್ರ. ಸಂ.** | **ತಾಲ್ಲೂಕು** | **ಮಂಜೂರಾದ ಹುದ್ದೆಗಳು** | **ಭರ್ತಿಯಾದ ಹುದ್ದೆಗಳು** | **ಖಾಲಿ ಹುದ್ದೆಗಳು** |
|---|---|---|---|---|
| 1 | ಬೀದರ್ | 118 | 81 | 37 |
| 2 | ಭಾಲ್ಕಿ | 105 | 72 | 33 |
| 3 | ಹುಮನಾಬಾದ | 109 | 64 | 45 |
| 4 | ಔರಾದ | 87 | 54 | 33 |
| 5 | ಬಸವಕಲ್ಯಾಣ | 85 | 48 | 37 |
| | **ಒಟ್ಟು** | **504** | **319** | **185** |

**ಮುಖ್ಯಪಶುವೈದ್ಯಾಧಿಕಾರಿಗಳು/ಹಿರಿಯಪಶುವೈದ್ಯಾಧಿಕಾರಿಗಳ**

**ಹುದ್ದೆಗಳು**:- ಜಿಲ್ಲೆಯಲ್ಲಿ ಒಟ್ಟು 09 ಹುದ್ದೆಗಳು ಖಾಲಿ ಇದ್ದು ಸದರಿ ಹುದ್ದೆಗಳು ಮುಂಬಡ್ತಿ ಹುದ್ದೆಗಳಾಗಿರುವುದರಿಂದ ಕಾಲಮಿತಿ ಮುಂಬಡ್ತಿ ನೀಡಲು ಈಗಾಗಲೇ ಕ್ರಮವಹಿಸಲಾಗಿದ್ದು ಪ್ರಸ್ತುತ ಖಾಲಿ ಹುದ್ದೆಗಳಿಗೆ ಹೆಚ್ಚುವರಿ ಪ್ರಭಾರ ವ್ಯವಸ್ಥೆ ಮಾಡಿ ಕ್ರಮವಹಿಸಲಾಗಿರುತ್ತದೆ.

**ಪಶುವೈದ್ಯಾಧಿಕಾರಿಗಳ ಹುದ್ದೆಗಳು**:- ಜಿಲ್ಲೆಯಲ್ಲಿ 08 ಹುದ್ದೆಗಳು ಖಾಲಿಯಿದ್ದು ರಾಜ್ಯದಲ್ಲಿ ಒಟ್ಟಾರೆ ಪಶುವೈದ್ಯಾಧಿಕಾರಿಗಳ 639 ಹುದ್ದೆಗಳನ್ನು ತುಂಬಲು ಸರ್ಕಾರ ಅನುಮತಿಗಾಗಿ ಪ್ರಸ್ತಾಪಿಸಲಾಗಿದ್ದು ಅನುಮತಿ ದೊರಕಿರುವುದಿಲ್ಲ. ಕಲ್ಯಾಣ-ಕರ್ನಾಟಕ ಅನುಚ್ಛೇದ-371(ಜೆ) ಅಡಿ 61 ಹುದ್ದೆಗಳನ್ನು ನೇರ ನೇಮಕಾತಿ ಮುಖಾಂತರ ಭರ್ತಿ ಮಾಡಲು ಕ್ರಮವಹಿಸಲಾಗಿದ್ದು ಪ್ರಸ್ತುತ ಕೋವಿಡ್-19 ಹಿನ್ನೆಲೆಯಲ್ಲಿ ನೇಮಕಾತಿಗೆ ತಡೆಹಿಡಿದ್ದಿದ್ದು ಆರ್ಥಿಕ ಇಲಾಖೆ ಅನುಮತಿ ನೀಡಿದ ಕೂಡಲೇ ನೇಮಕಾತಿ ಮಾಡುವಾಗ ಆದ್ಯತೆ ಮೇಲೆ ಭರ್ತಿ ಮಾಡಲು ಕ್ರಮವಹಿಸಲಾಗುವುದು.

**ಜಾನುವಾರು ಅಭಿವೃದ್ಧಿ ಅಧಿಕಾರಿ ಹುದ್ದೆ:** ಜಿಲ್ಲೆಯಲ್ಲಿ 03 ಖಾಲಿ ಹುದ್ದೆಗಳಿದ್ದು ಸದರಿ ಖಾಲಿ ಹುದ್ದೆಗಳನ್ನು ಜಾನುವಾರು ಅಧಿಕಾರಿ ಹುದ್ದೆಯಿಂದ ಮುಂಬಡ್ತಿ ಮುಖೇನ ಆದ್ಯತೆ ಮೇಲೆ ಭರ್ತಿ ಮಾಡಲು ಕ್ರಮವಹಿಸಲಾಗುತ್ತಿದೆ

**ಜಾನುವಾರು ಅಧಿಕಾರಿ ಹುದ್ದೆ:** ಜಿಲ್ಲೆಯಲ್ಲಿ 01 ಖಾಲಿ ಹುದ್ದೆಗಳಿದ್ದು ಸದರಿ ಖಾಲಿ ಹುದ್ದೆಗಳನ್ನು ಹಿರಿಯ ಪಶುವೈದ್ಯಕೀಯ ಪರೀಕ್ಷಕರ ಹುದ್ದೆಯಿಂದ ಮುಂಬಡ್ತಿ ಮುಖೇನ ಆದ್ಯತೆ ಮೇಲೆ ಭರ್ತಿ ಮಾಡಲು ಕ್ರಮವಹಿಸಲಾಗುತ್ತಿದೆ.

**ಹಿರಿಯ ಪಶುವೈದ್ಯಕೀಯ ಪರೀಕ್ಷಕರ ಹುದ್ದೆ:-** ಜಿಲ್ಲೆಯಲ್ಲಿ ಎಲ್ಲಾ ಹುದ್ದೆಗಳು ಭರ್ತಿಯಾಗಿರುತ್ತವೆ.

**ಪಶುವೈದ್ಯಕೀಯ ಪರೀಕ್ಷಕರ ಹುದ್ದೆ:-** ಜಿಲ್ಲೆಯಲ್ಲಿ 03 ಖಾಲಿ ಹುದ್ದೆಗಳಿದ್ದು ಸದರಿ ಖಾಲಿ ಹುದ್ದೆಗಳನ್ನು ಪಶುವೈದ್ಯಕೀಯ ಸಹಾಯಕರ ಹುದ್ದೆಯಿಂದ ಮುಂಬಡ್ತಿ ಮುಖೇನ ಆದ್ಯತೆ ಮೇಲೆ ಭರ್ತಿ ಮಾಡಲು ಕ್ರಮವಹಿಸಲಾಗಿದೆ. ಹಾಗೂ ಕಲ್ಯಾಣ-ಕರ್ನಾಟಕ ಅನುಚ್ಛೇದ-371(ಜೆ) ಅಡಿ ನೇರನೇಮಕಾತಿ ಮುಖಾಂತರ ಭರ್ತಿ ಮಾಡಲು ಕ್ರಮವಹಿಸಲಾಗಿದ್ದು ಪ್ರಸ್ತುತ ಕೋವಿಡ್-19 ಹಿನ್ನೆಲೆಯಲ್ಲಿ ನೇಮಕಾತಿಗೆ ತಡೆಹಿಡಿದ್ದಿದ್ದು ಆರ್ಥಿಕ ಇಲಾಖೆ ಅನುಮತಿ ನೀಡಿದ ಕೂಡಲೇ ನೇಮಕಾತಿ ಮಾಡುವಾಗ ಆದ್ಯತೆ ಮೇಲೆ ಭರ್ತಿ ಮಾಡಲು ಕ್ರಮವಹಿಸಲಾಗುವುದು.

**ಪಶುವೈದ್ಯಕೀಯ ಸಹಾಯಕರ ಹುದ್ದೆ:-** ಜಿಲ್ಲೆಯಲ್ಲಿ 01 ಖಾಲಿ ಹುದ್ದೆ ಇದ್ದು ಸದರಿ ಖಾಲಿ ಹುದ್ದೆಯನ್ನು 'ಡಿ' ದರ್ಜೆ ಹುದ್ದೆಯಿಂದ ಮುಂಬಡ್ತಿ ಮುಖೇನ ಆದ್ಯತೆ ಮೇಲೆ ಭರ್ತಿ ಮಾಡಲು ಕ್ರಮವಹಿಸಲಾಗುವುದು. ಹಾಗೂ ಕಲ್ಯಾಣ-ಕರ್ನಾಟಕ ಅನುಚ್ಛೇದ-371(ಜೆ) ಅಡಿ ನೇರನೇಮಕಾತಿ ಮುಖಾಂತರ ಭರ್ತಿ ಮಾಡಲು ಕ್ರಮವಹಿಸಲಾಗಿದ್ದು ಪ್ರಸ್ತುತ ಕೋವಿಡ್-19 ಹಿನ್ನೆಲೆಯಲ್ಲಿ ನೇಮಕಾತಿಗೆ ತಡೆಹಿಡಿದ್ದಿದ್ದು ಆರ್ಥಿಕ ಇಲಾಖೆ ಅನುಮತಿ ನೀಡಿದ ಕೂಡಲೇ ನೇಮಕಾತಿ ಮಾಡುವಾಗ ಆದ್ಯತೆ ಮೇಲೆ ಭರ್ತಿ ಮಾಡಲು ಕ್ರಮವಹಿಸಲಾಗುವುದು

**ಲಿಪಿಕ ವೃಂದದ ಹುದ್ದೆಗಳು:-** ಜಿಲ್ಲೆಯಲ್ಲಿ 02 ಹುದ್ದೆಗಳು ಖಾಲಿ ಇದ್ದು ಕಲ್ಯಾಣ-ಕರ್ನಾಟಕ ಅನುಚ್ಛೇದ-371(ಜೆ) ಅಡಿ ನೇರ ನೇಮಕಾತಿ ಹಾಗೂ ಅನುಕಂಪದ ಆಧಾರದ ಮೇಲೆ ನೌಕರಿ ನೀಡುವ ಸಂಧರ್ಭದಲ್ಲಿ ಆದ್ಯತೆ ಮೇಲೆ ಭರ್ತಿ ಮಾಡಲು ಕ್ರಮವಹಿಸಲಾಗಿದ್ದು ಪ್ರಸ್ತುತ ಕೋವಿಡ್-19 ಹಿನ್ನೆಲೆಯಲ್ಲಿ ನೇಮಕಾತಿಗೆ ತಡೆ ಇದ್ದು ಆರ್ಥಿಕ ಇಲಾಖೆ ಅನುಮತಿ ನೀಡಿದ ಕೂಡಲೇ ನೇಮಕಾತಿ ಮಾಡುವಾಗ ಆದ್ಯತೆ ಮೇಲೆ ಭರ್ತಿ ಮಾಡಲು ಕ್ರಮವಹಿಸಲಾಗುವುದು.

**ಲ್ಯಾಬ್ ಟೆಕ್ನೀಶಿಯನ್ ಹುದ್ದೆ:-** ಜಿಲ್ಲೆಯಲ್ಲಿ 01 ಹುದ್ದೆ ಖಾಲಿ ಇದ್ದು ಕರ್ನಾಟಕ ಲೋಕ ಸೇವಾ ಆಯೋಗದ ಮುಖಾಂತರ ಭರ್ತಿ ಮಾಡುವ ಸಂಬಂಧ ಪ್ರಸ್ತಾವನೆ ಸಲ್ಲಿಸಲಾಗಿದೆ.

| | | |
|---|---|---|
| | | **ವಾಹನ ಚಾಲಕರ ಹುದ್ದೆಗಳು**:- ಜಿಲ್ಲೆಯಲ್ಲಿ 7 ವಾಹನ ಚಾಲಕರ ಹುದ್ದೆಗಳು ಮಂಜೂರಾಗಿದ್ದು, 2 ಹುದ್ದೆಗಳು ಖಾಲಿ ಇರುತ್ತವೆ. ಸದರಿ 2 ಖಾಲಿ ಹುದ್ದೆಗಳಿಗೆದುರಾಗಿ ಹೊರಗುತ್ತಿಗೆ ಆಧಾರದ ಮೇಲೆ ಸೇವೆ ಪಡೆಯಲಾಗಿದೆ.<br><br>**'ಡಿ' ದರ್ಜೆ ಹುದ್ದೆಗಳು**:- ಜಿಲ್ಲೆಯಲ್ಲಿ ಪ್ರಸ್ತುತ 155 ಹುದ್ದೆಗಳು ಖಾಲಿಯಿದ್ದು, ಈ ಖಾಲಿ ಹುದ್ದೆಗಳಿಗೆ ಎದುರಾಗಿ 79 ಹುದ್ದೆಗಳಿಗೆ ಹೊರಗುತ್ತಿಗೆ ಆಧಾರದ ಮೇಲೆ ಸೇವೆಯನ್ನು ಪಡೆಯಲಾಗಿದೆ. |
| **ಉ** | ಬೀದರ್ ಜಿಲ್ಲೆಯಿಂದ ಅಂಬುಲೆನ್ಸ್ ಸೇವೆಗೆ 1962ಗೆ ಬಂದಿರುವ ಕರೆಗಳು ಎಷ್ಟು; ತುರ್ತು ಚಿಕಿತ್ಸೆಗಾಗಿ ಎಷ್ಟು ಬಾರಿ ಅಂಬುಲೆನ್ಸ್ ಬಳಸಲಾಗಿದೆ? (ತಾಲ್ಲೂಕುವಾರು ಮಾಹಿತಿ ನೀಡುವುದು) | ಬೀದರ್ ಜಿಲ್ಲೆಯಿಂದ ಅಂಬುಲೆನ್ಸ್ ಸೇವೆಗೆ 1962ಗೆ 14 ಕರೆಗಳನ್ನು ಸ್ವೀಕರಿಸಲಾಗಿದ್ದು, 30 ತುರ್ತು ಚಿಕಿತ್ಸೆ ನೀಡಲಾಗಿದೆ. (ಬೀದರ್-16, ಔರಾದ-6, ಹುಮ್ನಬಾದ್ – 5, ಬಾಲ್ಕಿ – 2. ಬಸವಕಲ್ಯಾಣ -1)<br>ಟಿಪ್ಪಣಿ: ಎರಡು-ಮೂರು ಜನ ರೈತರು ಸೇರಿ ಒಂದು ಕರೆ ಮಾಡಿದ್ದು, ಒಟ್ಟು 14 ಕರೆಗಳಿಂದ 30 ಜಾನುವಾರುಗಳಿಗೆ ಚಿಕಿತ್ಸೆ ನೀಡಲಾಗಿದೆ. |

**ಪಸಂಮೀ ಇ-315 ಸಲೆವಿ 2020**

ಪ್ರಭು ಬಿ. ಚವ್ಹಾಣ್

ಪಶುಸಂಗೋಪನೆ, ಹಜ್ ಮತ್ತು ವಕ್ಫ್ ಸಚಿವರು,